## ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಮರಿತಿಬ್ಬೇಗೌಡ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 640

ಉತ್ತರಿಸಬೇಕಾದ ದಿನಾಂಕ : 22-02-2022

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪಿಕಾರ್ಡ್ ಬ್ಯಾಂಕುಗಳಿಂದ ರೈತರು ಸಾಲ ಪಡೆದು, ದಿನಾಂಕ:31.01.2020ಕ್ಕೆ ಸುಸ್ತಿಯಾಗಿರುವವರಿಗೆ ದಿನಾಂಕ:30.06.2020 ರ ಒಳಗಾಗಿ ಅಸಲನ್ನು ಪಾವತಿಸಿದವರಿಗೆ ಸರ್ಕಾರ ಸಂಪೂರ್ಣ ಬಡ್ಡಿ ಮನ್ನಾ ಮಾಡಲಾಗಿದೆಯೇ; | ಹೌದು, ಸಂಪೂರ್ಣ ಬಡ್ಡಿ ಮನ್ನಾ ಮಾಡಲಾಗಿದೆ. |
| ಆ) | ದಿನಾಂಕ:31.01.2020 ರ ಅವಧಿಯಲ್ಲಿ ಸುಸ್ತಿಯಾಗಿದ್ದ ಸಾಲಗಾರರ ಸಂಖ್ಯೆ ಎಷ್ಟು; ಈ ಯೋಜನೆಯನ್ನು ಉಪಯೋಗಿಸಿಕೊಂಡ ಫಲಾನುಭವಿಗಳ ಸಂಖ್ಯೆ ಎಷ್ಟು; | ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್(ಪಿಕಾರ್ಡ್)ಗಳಲ್ಲಿ ದಿ:31.01.2020 ರ ಅಂತ್ಯಕ್ಕೆ 75,904 ರೈತರು ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲ ಕಂತುಗಳನ್ನು ಪಾವತಿಸಲು ಸುಸ್ತಿಯಾಗಿದ್ದು, ಈ ಯೋಜನೆಯಲ್ಲಿ 41,881 ರೈತರು ಸುಸ್ತಿ ಅಸಲನ್ನು ಪಾವತಿಸಿ ಬಡ್ಡಿ ಮನ್ನಾ ಸೌಲಭ್ಯ ಪಡೆದಿರುತ್ತಾರೆ. |
| ಇ) | ಸದರಿಯವರು ಪಾವತಿಸಿದ ಅಸಲಿನ ಮೊತ್ತವೆಷ್ಟು; ಅದರ ಬಾಬ್ತು ಮನ್ನಾವಾದ ಬಡ್ಡಿಯ ಒಟ್ಟು ಮೊತ್ತವೆಷ್ಟು; | ಸದರಿ ಯೋಜನೆಯಲ್ಲಿ ಪಿಕಾರ್ಡ್ ಬ್ಯಾಂಕಿನ ರೈತರು ರೂ.179.76 ಕೋಟಿಗಳ ಸುಸ್ತಿ ಅಸಲನ್ನು ಮರುಪಾವತಿಸಿದ್ದು, ಇದರ ಮೇಲಿನ ಬಡ್ಡಿ ಮನ್ನಾ ಮೊತ್ತ ರೂ.168.39 ಕೋಟಿಗಳಾಗಿರುತ್ತದೆ. |
| ಈ) | ದಿನಾಂಕ:31.01.2020ರ ಅವಧಿಯಲ್ಲಿ ಸುಸ್ತಿಯಾಗಿದ್ದು, ನಿಗದಿತ ಅವಧಿಯಲ್ಲಿ ಅಸಲನ್ನು ಪಾವತಿಸದೆ ಇರುವವರ ಸಂಖ್ಯೆ ಎಷ್ಟು; ಅಸಲಿನ ಒಟ್ಟು ಮೊತ್ತವೆಷ್ಟು; | ದಿ:31.01.2020ರ ಅಂತ್ಯಕ್ಕೆ ಸುಸ್ತಿಯಾದ ಅಸಲನ್ನು ದಿ:30.06.2020 ರ ಅವಧಿಯಲ್ಲಿ 34,023 ರೈತರು ಮರುಪಾವತಿಸಿರುವುದಿಲ್ಲ. ಸದರಿ ಅಸಲಿನ ಮೊತ್ತ ರೂ.156.26 ಕೋಟಿಗಳಾಗಿರುತ್ತದೆ. |
| ಉ) | ಸದರಿ ಯೋಜನೆಯ ಅವಧಿಯೊಳಗೆ ಅಸಲು ತೀರುವಳಿ ಮಾಡದೆ ಇರುವವರಿಗೆ ಸರ್ಕಾರ ಪ್ರಸ್ತುತ ಮತ್ತೊಂದು ಅವಕಾಶ ನೀಡಲಾಗುವುದೇ? | ಅಂತಹ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |

ಸಂಖ್ಯೆ ಸಿಒ 52 ಸಿಎಲ್‌ಎಸ್ 2022

(ಎಸ್. ಟಿ. ಸೋಮಶೇಖರ್)

ಸಹಕಾರ ಸಚಿವರು